ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 06 ನೇ ಮಾರ್ಚ್, 2020

ಕನ್ನಡ ಭವನದ ನಿರ್ಲಕ್ಷತನದ ಕುರಿತು

ಶ್ರೀ ಘೋಟ್ನೆಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

284 (314) ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಾರವಾರ ಜಿಲ್ಲೆಯ ಜೋಯಿಡಾ ತಾಲ್ಲೂಕಿನಲ್ಲಿರುವ ಏಕೈಕ ಕನ್ನಡ ಭವನವು ಅಧಿಕಾರಿಗಳ, ನಿರ್ಲಕ್ಷತನದಿಂದ ಪಾಳು ಬಿದ್ದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; (ವಿವರ ನೀಡುವುದು)

(ಆ) ಜೋಯಿಡಾದಲ್ಲಿರುವ ಕನ್ನಡ ಭವನದಲ್ಲಿ ಯಾವುದೇ ಮೂಲಭೂತ ಸೌಕರ್ಯ ಇಲ್ಲದೇ ಇರುವುದರಿಂದ ಸರ್ಕಾರಿ ಸಭೆ ನಡೆಸಲು ಸಮಸ್ಯೆ ಆಗಿದ್ದು ಹಾಗೂ ಸದರಿ ಭವನದಲ್ಲಿ ಸ್ವಚ್ಛತೆಯ ಕೊರತೆ ಇರುವುದರ ಪ್ರಯುಕ್ತ ಯಾವುದೇ ಕಾರ್ಯಕ್ರಮ ನಡೆಸಲಾರದೇ ಭವನ ಹಾಳಾಗಿದ್ದು ಈ ಬಗ್ಗೆ ಸಂಬಂಧಿಸಿದ ಅಧಿಕಾರಿಗಳು ಇಲ್ಲಿಯವರೆಗೆ ಮಾಡಿರುವ ನಿಷ್ಕಾಳಜಿತನಕ್ಕೆ ಸೂಕ್ತ ಕ್ರಮ ಕೈಗೊಳ್ಳಲಾಗುವುದೇ ; ಮುಂದಿನ ದಿನಗಳಲ್ಲಿ ಸದರಿ ಭವನ ಎಲ್ಲಾ ಸೌಕರ್ಯಗಳಿಂದ ಅನುಕೂಲವಾಗುವ ರೀತಿಯಲ್ಲಿ ಸಿಗುವಂತೆ ಸರ್ಕಾರ ಕ್ರಮ ಕೈಗೊಳ್ಳುವುದೇ ? (ವಿವರ ನೀಡುವುದು)